# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1738 (2073)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಕಂದಾಯ ಸಚಿವರು

ವಿಷಯ : ಸ್ಮಶಾನಕ್ಕಾಗಿ ಮಂಜೂರಾದ ಭೂಮಿಯನ್ನು ಅಕ್ರಮ ಸಕ್ರಮ ಯೋಜನೆಯಲ್ಲಿ ಭೂಮಿ ಮಂಜೂರಾತಿ ಮಾಡಿರುವ ಕುರಿತು.

(ಅ) ಉಡುಪಿ ಜಿಲ್ಲೆಯಲ್ಲಿ ವಿವಿಧ ಸಮುದಾಯದ ಸ್ಮಶಾನಕ್ಕಾಗಿ ಕಾಯ್ದಿರಿಸಿದ ಕಂದಾಯ ಭೂಮಿಯ ಸಂಖ್ಯೆ ಎಷ್ಟು ; ಹಾಗೂ ಅವುಗಳ ವಿಸ್ತೀರ್ಣವೆಷ್ಟು ; ಪಹಣಿಯಲ್ಲಿ ದಾಖಲಾದ ಸ್ಮಶಾನ ಭೂಮಿಯ ಸಂಖ್ಯೆ ಎಷ್ಟು ; ಅವುಗಳಲ್ಲಿ ಗಡಿ ಗುರುತಿಸಿದ ಹಾಗೂ ಗಡಿ ಗುರುತಿಸದ ಪ್ರಕರಣಗಳ ಸಂಖ್ಯೆ ಎಷ್ಟು ; ಕಾಯ್ದಿರಿಸಿದ ಭೂಮಿಯನ್ನು ಗ್ರಾಮಪಂಚಾಯತಿಗೆ ಹಸ್ತಾಂತರಿಸಿದ ಪ್ರಕರಣಗಳೆಷ್ಟು; ಹಸ್ತಾಂತರಿಸದೇ ಇರುವ ಪ್ರಕರಣಗಳೆಷ್ಟು ; (ತಾಲ್ಲೂಕುವಾರು, ಗ್ರಾಮವಾರು, ಸಮುದಾಯವಾರು ಮಾಹಿತಿ ನೀಡುವುದು )

(ಆ) ಉಡುಪಿ ಜಿಲ್ಲೆಯಲ್ಲಿ ವಿವಿಧ ಸಮುದಾಯದ ಸ್ಮಶಾನಕ್ಕಾಗಿ ಭೂಮಿಯನ್ನು ಕಾಯ್ದಿರಿಸದೇ ಇರುವ ಗ್ರಾಮಗಳು ಯಾವುವು; ಮತ್ತು ಅವುಗಳಿಗೆ ಸ್ಮಶಾನಕ್ಕಾಗಿ ಜಾಗವನ್ನು ಕಾಯ್ದಿರಿಸಲು ಕ್ರಮ ಕೈಗೊಳ್ಳಲಾಗುವುದು ಯಾವಾಗ ;

(ಇ) ಸ್ಮಶಾನಕ್ಕಾಗಿ ಮಂಜೂರಾದ ಭೂಮಿಯನ್ನು ಅಕ್ರಮ ಸಕ್ರಮ ಯೋಜನೆಯಲ್ಲಿ ಭೂಮಿ ಮಂಜೂರಾತಿ ಮಾಡಿದ ಪ್ರಕರಣಗಳ ಸಂಖ್ಯೆ ಎಷ್ಟು ; ಅವು ಯಾವುವು ; ಅಕ್ರಮವಾಗಿ ಮಂಜೂರಾತಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರಿಪಡಿಸಲು ಸರ್ಕಾರದ ಕ್ರಮವೇನು ?